## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1493
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 24.09.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸಾರಿಗೆ ಇಲಾಖೆಯ ವತಿಯಿಂದ ವಿದ್ಯಾರ್ಥಿಗಳಿಗೆ ರಿಯಾಯಿತಿ ದರದಲ್ಲಿ ಬಸ್‌ಪಾಸನ್ನು ನೀಡಲಾಗುತ್ತಿದೆಯೇ; | ಹೌದು. |
| ಆ. | ಸೇವಾ ಸಿಂಧು ಮಾಹಿತಿ ಕೇಂದ್ರಗಳ ಮೂಲಕ ವಿದ್ಯಾರ್ಥಿಗಳು ಬಸ್‌ಪಾಸ್ ಪಡೆಯಲು ಅವಕಾಶ ಕಲ್ಪಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮಗಳಲ್ಲಿ ವಿದ್ಯಾರ್ಥಿ ಬಸ್ ಪಾಸ್ ವಿತರಣೆಯನ್ನು ಸೇವಾಸಿಂಧು ಮುಖಾಂತರ ತಂದಿರುವುದರಿಂದ ವಿದ್ಯಾರ್ಥಿಗಳು ಸೇವಾಸಿಂಧು ಪೋರ್ಟಲ್‌ನಲ್ಲಿ ಬಸ್ ಪಾಸ್‌ಗಳನ್ನು ಪಡೆಯಲು ನೇರವಾಗಿ ಅರ್ಜಿ ಸಲ್ಲಿಸಬಹುದಾಗಿರುತ್ತದೆ.<br><br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ವಿದ್ಯಾರ್ಥಿ ಪಾಸಿನ ಆನ್ಲೈನ್ ತಂತ್ರಾಂಶವನ್ನು ಬೆಂ.ಮ.ಸಾ.ಸಂಸ್ಥೆಯಿಂದಲೇ ಅಭಿವೃದ್ಧಿಪಡಿಸಿದ್ದು, ಸಂಸ್ಥೆಯ ವೆಬ್ಸೈಟ್ www.mybmtc.karnataka.gov.inನಲ್ಲಿ ಹಾಗೂ ಸೇವಾ ಸಿಂಧು ಪೋರ್ಟಲ್‌ನಲ್ಲಿ ನೇರವಾಗಿ ಅರ್ಜಿ ಸಲ್ಲಿಸಬಹುದಾಗಿರುತ್ತದೆ.<br><br>ಮುಂದುವರೆದು, ವಿದ್ಯಾರ್ಥಿಗಳು ಸಾಮಾನ್ಯ ಸೇವಾ ಕೇಂದ್ರಗಳು(CSC), ಬೆಂಗಳೂರು-1, ಕರ್ನಾಟಕ-1 ಹಾಗೂ ಗ್ರಾಮ-1 ಕೇಂದ್ರಗಳಲ್ಲಿ ನಿಗಧಿತ ಸೇವಾ ಶುಲ್ಕ ಪಾವತಿಸಿ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.<br><br>ಅರ್ಜಿ ಸಲ್ಲಿಸಿದ ಅರ್ಹ ವಿದ್ಯಾರ್ಥಿಗಳಿಗೆ ನಿಗಮದ ಕೌಂಟರ್‌ಗಳಲ್ಲಿ ಪಾಸ್‌ಗಳನ್ನು ವಿತರಿಸಲಾಗುತ್ತಿದೆ. |
| ಇ. | ಸೇವಾ ಸಿಂಧು ಮಾಹಿತಿ ಕೇಂದ್ರಗಳಲ್ಲಿ ವಿದ್ಯಾರ್ಥಿಗಳು ಅನಗತ್ಯವಾಗಿ ಹೆಚ್ಚಿನ ಹಣ ನೀಡಿ ಸರದಿ ಸಾಲಿನಲ್ಲಿ ನಿಂತು ಪಾಸು ಪಡೆಯುವಲ್ಲಿ ತುಂಬಾ ಅನಾನುಕೂಲಗಳು ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯಾರ್ಥಿಗಳು ಬಸ್ ಪಾಸ್‌ಗಳನ್ನು ಪಡೆಯಲು ನೇರವಾಗಿ ತಾವೇ ಸ್ವತಃ ಸೇವಾಸಿಂಧು ಪೋರ್ಟಲ್‌ನಲ್ಲಿ ಅರ್ಜಿ ಸಲ್ಲಿಸಬಹುದಾಗಿರುತ್ತದೆ. ಅಲ್ಲದೇ, ಸಾಮಾನ್ಯ ಸೇವಾ ಕೇಂದ್ರಗಳು(CSC), ಬೆಂಗಳೂರು-1, ಕರ್ನಾಟಕ-1 ಹಾಗೂ ಗ್ರಾಮ-1 ಕೇಂದ್ರಗಳಲ್ಲಿಯೂ ಸಹ ನಿಗಧಿತ ಸೇವಾ ಶುಲ್ಕ ಪಾವತಿಸಿ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದ್ದು, ಅನಾನುಕೂಲಗಳು ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

| | | |
|---|---|---|
| ಈ. | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ವಿದ್ಯಾರ್ಥಿಗಳಿಗೆ ಸೇವಾ ಸಿಂಧು ಮಾಹಿತಿ ಕೇಂದ್ರಗಳ ಬದಲಿಗೆ ಹಿಂದಿನಂತೆ ಪಾಸ್ ವಿತರಿಸಲು ಸರ್ಕಾರ ಕ್ರಮವಹಿಸುವುದು? | ವಿದ್ಯಾರ್ಥಿ ಬಸ್ ಪಾಸ್‌ಗಳನ್ನು ಈ ಹಿಂದೆ ಮ್ಯಾನ್ಯೂಯಲ್ ಪದ್ಧತಿಯಲ್ಲಿ ವಿತರಿಸಲಾಗುತ್ತಿತ್ತು. ಸದರಿ ಸೇವೆಗಳನ್ನು ಪಾರದರ್ಶಕವಾಗಿ ಆನ್‌ಲೈನ್ ವ್ಯವಸ್ಥೆಯಡಿ ಸೇವಾಸಿಂಧು ಮುಖಾಂತರ ವಿತರಿಸುತ್ತಿರುವುದರಿಂದ ಪ್ರಸ್ತುತ ವ್ಯವಸ್ಥೆಯನ್ನು ಮುಂದುವರೆಸಲಾಗುವುದು. |

ಸಂಖ್ಯೆ: ಟಿಡಿ 225 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು